# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 857(853) |
| ಸದಸ್ಯರ ಹೆಸರು | : | ಶ್ರೀ.ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 20.09.2021 |
| ಉತ್ತರಿಸುವವರು | : | ಮಾನ್ಯ ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇತ್ತೀಚಿನ ಅಧ್ಯಯನದ ಪ್ರಕಾರ, ಒಟ್ಟಾರೆ ವಿವಿಧ ಬಗೆಯ ರಣಹದ್ದುಗಳ ಸಂತತಿಗಳೆಷ್ಟು; | ರಣಹದ್ದುಗಳ ಸಂತತಿಯ ಪ್ರಮಾಣದ ಬಗ್ಗೆ ಯಾವುದೇ ಅಧ್ಯಯನ ಕೈಗೊಳ್ಳಲಾಗಿರುವುದಿಲ್ಲ. ಆದರೆ, ಕರ್ನಾಟಕ ರಾಜ್ಯವು ಬಿಳಿ-ರಂಪ್ಡ್ ರಣಹದ್ದು, ಭಾರತೀಯ ರಣಹದ್ದು, ಕೆಂಪು ತಲೆಯ ರಣಹದ್ದು ಮತ್ತು ಈಜಿಪ್ಟಿನ ರಣಹದ್ದುಗಳ ಆವಾಸಸ್ಥಾನವಾಗಿದ್ದು ಇವುಗಳ ಸಂತಾನೋತ್ಪತ್ತಿ ಆಗುತ್ತಿರುವುದು ತಿಳಿದುಬಂದಿದೆ. |
| ಆ) | ಕಳೆದ 4 ದಶಕಗಳಿಂದ ರಾಜ್ಯದಲ್ಲಿ ರಣಹದ್ದುಗಳ ಸಂತತಿ ಕ್ಷೀಣಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಸಂತತಿಗಳ ಉಳಿವಿಗೆ ರಾಜ್ಯ ಸರ್ಕಾರ ಕೈಗೊಂಡಿರುವ ಕ್ರಮಗಳು ಮತ್ತು ಕಾರ್ಯಕ್ರಮಗಳು ಯಾವುವು (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br><br>ರಾಜ್ಯ ಸರ್ಕಾರವು ರಾಜ್ಯದಲ್ಲಿ ರಣಹದ್ದುಗಳ ಸಂರಕ್ಷಣೆಗಾಗಿ ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ:<br>1. ಅಳಿವಿನಂಚಿನಲ್ಲಿರುವ ಭಾರತೀಯ ರಣಹದ್ದು ಸಂರಕ್ಷಣೆಗಾಗಿ "**ರಾಮದೇವರಬೆಟ್ಟ ರಣಹದ್ದು ಅಭಯಾರಣ್ಯ**" ವನ್ನು 2012 ರಲ್ಲಿ ಘೋಷಿಸಲಾಗಿದೆ.<br>2. "ಡೈಕ್ಲೋಫೆನಾಕ್" ಔಷಧಿಯನ್ನು ಪಶುವೈದ್ಯಕೀಯ ಬಳಕೆಗಾಗಿ ಕರ್ನಾಟಕದಾದ್ಯಂತ ನಿಷೇಧಿಸಲಾಗಿದೆ.<br>3. ಬಿಳಿ-ರಂಪ್ಡ್ ರಣಹದ್ದು ಮತ್ತು ಕೆಂಪು ತಲೆಯ ರಣಹದ್ದುಗಳ ಸಣ್ಣ ಆರೋಗ್ಯಕರ ಸಂಖ್ಯೆಯಲ್ಲಿ ಕರ್ನಾಟಕದ ಸಂರಕ್ಷಿತ ಅರಣ್ಯ ಪ್ರದೇಶಗಳಾದ ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ ಮತ್ತು ನಾಗರಹೊಳೆ ರಾಷ್ಟ್ರೀಯ ಉದ್ಯಾನವನ, ಮಲೈಮಹದೇಶ್ವರ ಅಭಯಾರಣ್ಯಗಳಲ್ಲಿ ಪುನರುಜ್ಜೀವನಗೊಳ್ಳುತ್ತಿರುವುದು.<br>4. ಭಾರತೀಯ ರಣಹದ್ದು ಸಂರಕ್ಷಣೆಗಾಗಿ ರಾಜ್ಯದಲ್ಲಿ ರಣಹದ್ದು ಸಂತಾನೋತ್ಪತ್ತಿ ಕೇಂದ್ರವನ್ನು ಸ್ಥಾಪಿಸಲು ಕ್ರಮ ವಹಿಸಲಾಗುತ್ತಿದೆ. |
| ಇ) | ರಣಹದ್ದುಗಳು ರಾಜ್ಯ ಮತ್ತು ದೇಶವನ್ನು ಬಿಟ್ಟು ಬೇರೆ ರಾಷ್ಟ್ರಗಳಲ್ಲಿರುವ ಅನುಕೂಲಕರ ವಾತಾವರಣ ಬಯಸಿ ವಲಸೆ ಹೋಗುತ್ತಿರುವುದು ರಾಜ್ಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ರಾಜ್ಯ ಸರ್ಕಾರ ಯಾವುದಾದರೂ ಅಧ್ಯಯನ ನಡೆಸಿದೆಯೇ; (ವಿವರ ನೀಡುವುದು) | ರಣಹದ್ದುಗಳು ರಾಜ್ಯ ಮತ್ತು ದೇಶವನ್ನು ಬಿಟ್ಟು ಬೇರೆ ರಾಷ್ಟ್ರಗಳಲ್ಲಿರುವ ಅನುಕೂಲಕರ ವಾತಾವರಣ ಬಯಸಿ ವಲಸೆ ಹೋಗುತ್ತಿರುವ ಬಗ್ಗೆ ನಿಖರ ವರದಿಗಳು ಇರುವುದಿಲ್ಲ.<br><br>ಈ ಬಗ್ಗೆ ಯಾವುದೇ ಅಧ್ಯಯನ ನಡೆಸುವುದು ಅವಶ್ಯಕತೆ ಕಂಡುಬರುವುದಿಲ್ಲ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ರಾಜ್ಯದಲ್ಲಿರುವ ಬಿಳಿ ಕೊಕ್ಕು, ಉದ್ದನೆ ಮತ್ತು ಸಣ್ಣ ಗಾತ್ರದ ಹೊಟ್ಟೆಯಿರುವ ರಣ ಹದ್ದುಗಳ ಸಂತತಿ ಇತ್ತೀಚಿನ ದಿನಗಳಲ್ಲಿ ನಶಿಸಿ ಹೋಗುತ್ತಿದ್ದು, ಈ ಸಂತತಿಗಳ ಉಳಿವಿಗೆ ಮತ್ತು ಸಂರಕ್ಷಣೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳು ಯಾವುವು? (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ರಣಹದ್ದುಗಳ ಸಂರಕ್ಷಣೆಗಾಗಿ ಕೇಂದ್ರ ಸರ್ಕಾರದಿಂದ ಅನುಮೋದನೆಗೊಂಡಂತೆ Action Plan for Vulture Conservation (APVC) in India 2020-2025 Initiate Conservation Breeding Programme of Red-Headed Vulture and Egyptian Vulture ಎಂಬ ಯೋಜನೆಯನ್ನು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿ Establishing Vulture Conservation Breeding Centre ಎನ್ನುವ ಯೋಜನೆಯಡಿ ಜಾರಿಗೊಳಿಸಲು ಕ್ರಮವಹಿಸಲಾಗುತ್ತಿದೆ. ಈ ರೀತಿ ಕೃತಕವಾಗಿ ಸಂತಾನೋತ್ಪತ್ತಿ ಮೂಲಕ ಬೆಳೆಸಿರುವ ವಿವಿಧ ರಣಹದ್ದುಗಳನ್ನು ಅಭಯಾರಣ್ಯದಲ್ಲಿ ಬಿಡುಗಡೆ ಮಾಡಲಾಗುತ್ತದೆ. |

ಸಂಖ್ಯೆ: ಅಪಜೀ 184 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು